# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 547 |
| ಮಾನ್ಯ ಸದಸ್ಯರ ಹೆಸರು | ಶ್ರೀ ಪ್ರತಾಪ ಸಿಂಹ ನಾಯಕ್.ಕೆ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದವರು | 24-09-2020 |
| ಉತ್ತರಿಸಬೇಕಾದ ದಿನಾಂಕ | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಶಿಕ್ಷಣ ಸಂಸ್ಥೆಗಳ ಸುತ್ತಮುತ್ತ ವೈನ್‌ಶಾಪ್ ಮತ್ತು ಪಬ್‌ಗಳನ್ನು ತೆರೆಯಲು ಯಾವ ಮಾನದಂಡಗಳನ್ನು ಅನುಸರಿಸಿ ಅನುಮತಿ ನೀಡಲಾಗುತ್ತಿದೆ: ಈ ಮಾನದಂಡಗಳನ್ನು ಅನುಸರಿಸಲು ಯಾವ ವೈಜ್ಞಾನಿಕ ಕಾರಣಗಳನ್ನು ಅನುಸರಿಸಲಾಗಿದೆ: | ಶಿಕ್ಷಣ ಸಂಸ್ಥೆಗಳ ಸುತ್ತಮುತ್ತ ವೈನ್‌ಶಾಪ್ ಮತ್ತು ಪಬ್‌ಗಳನ್ನು ತೆರೆಯುವ ಸಂಬಂಧದಲ್ಲಿ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) 1967 ರ ನಿಯಮ 5 ರಡಿ ನಿರ್ದಿಷ್ಟ ಅಂತರವನ್ನು ನಿಗದಿಪಡಿಸಲಾಗಿದೆ. ಅದರಂತೆ ಶಿಕ್ಷಣ ಸಂಸ್ಥೆಗಳಿಂದ 100 ಮೀಟರ್ ಅಂತರದೊಳಗೆ ವೈನ್‌ಶಾಪ್ ಹಾಗೂ ಪಬ್ ತೆರೆಯಲು ಆಸ್ಪದ ಇರುವುದಿಲ್ಲ.<br><br>ಸದರಿ ಅಂತರವನ್ನು ಅಳೆಯಲು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) 1967 ರ ನಿಯಮ 5 (3) ರಡಿ ಅನುಸರಿಸಬೇಕಾದ ಕ್ರಮದ ಬಗ್ಗೆ ವಿವರಣೆ ಇರುತ್ತದೆ.<br><br>ಸರ್ಕಾರವು ಅಧಿಸೂಚನೆ ಸಂಖ್ಯೆ:ಎಫ್‌ಡಿ/11/ಪಿಇಎಸ್/ 2015, ದಿನಾಂಕ:19-05-2017 ರಲ್ಲಿ ತಿದ್ದುಪಡಿ ಹೊರಡಿಸುತ್ತಾ, ದಿನಾಂಕ:01-07-2016 ರಂದು ನವೀಕರಣಗೊಂಡಿದ್ದ ಅಥವಾ ಅಸ್ತಿತ್ವದಲ್ಲಿದ್ದ ಸನ್ನದುಗಳಿಗೆ 100 ಮೀಟರ್ ಅಂತರದೊಳಗೆ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು), 1967 ರ ನಿಯಮ 5 (1) ರಲ್ಲಿ ತಿಳಿಸಿರುವ ಯಾವುದೇ ಧಾರ್ಮಿಕ ಅಥವಾ ಶೈಕ್ಷಣಿಕ ಸಂಸ್ಥೆ ಅಥವಾ ಆಸ್ಪತ್ರೆ ಅಥವಾ ಯಾವುದೇ ರಾಜ್ಯ ಸರ್ಕಾರಿ/ಕೇಂದ್ರ ಸರ್ಕಾರಿ/ಸ್ಥಳೀಯ ಸಂಸ್ಥೆಗಳ ಕಛೇರಿಗಳಿಂದ ವಿನಾಯಿತಿ ನೀಡಲಾಗಿರುತ್ತದೆ. |
| ಆ) | ಇತ್ತೀಚಿನ ದಿನಗಳಲ್ಲಿ ಪತ್ರಿಕೆ ಮತ್ತು ಮಾಧ್ಯಮಗಳಲ್ಲಿ ವ್ಯಾಪಕವಾಗಿ ಚರ್ಚಿಸಲ್ಪಟ್ಟಂತೆ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳನ್ನು ಕೇಂದ್ರವಾಗಿಸಿ ಮಾದಕದ್ರವ್ಯ ಜಾಲ ತನ್ನ ಚಟುವಟಿಕೆಯನ್ನು ವಿಸ್ತರಿಸುತ್ತಿರುವುದು ನಿಜವೇ: | ಹೌದು.<br>ಮಾದಕ ವಸ್ತುಗಳ ಮಾರಾಟ ಜಾಲವು ಚಟುವಟಿಕೆ ವಿಸ್ತರಿಸಲು ಹೆಚ್ಚಿನದಾಗಿ ಶಾಲಾ ಕಾಲೇಜು ವಿದ್ಯಾರ್ಥಿಗಳು ಹಾಗೂ ಯುವಜನರನ್ನು ಕೇಂದ್ರವಾಗಿಸಲಾಗುತ್ತಿದೆ. |

| | | |
|---|---|---|
| ಇ) | ಈ ಹಿನ್ನೆಲೆಯಲ್ಲಿ ಶಾಲಾ ಕಾಲೇಜುಗಳ ಸುತ್ತಮುತ್ತ ಈ ರೀತಿಯ ಚಟುವಟಿಕೆಗಳಿಗೆ ಆಸ್ಪದಕೊಡದಂತೆ ಸರ್ಕಾರ ಹೊಸ ಮಾನದಂಡಗಳನ್ನು ಸಿದ್ದಪಡಿಸಿ, ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಂಡು ಮಾದಕದ್ಯವ್ಯ ಜಾಲವನ್ನು ಮಟ್ಟಹಾಕಲು ಮುಂದಾಗುವುದೇ? | ಮಾದಕ ವಸ್ತುಗಳ ಮಾರಾಟ ಮತ್ತು ಬಳಕೆ ತಡೆಗಟ್ಟಲು ಸರ್ಕಾರದ ವತಿಯಿಂದ ಕೈಗೊಳ್ಳಲಾಗುತ್ತಿರುವ ಕ್ರಮಗಳ ವಿವರವನ್ನು ಅನುಬಂಧ–ಎ ರಲ್ಲಿ ನೀಡಲಾಗಿದೆ. |

ಆಇ 69 ಇಎಲ್‌ಕ್ಯೂ 2020

(ಹೆಚ್. ನಾಗೇಶ್)
ಅಬಕಾರಿ ಸಚಿವರು

## ಅನುಬಂಧ-ಎ:

## ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆ ತಡೆಗಟ್ಟುವ ನಿಟ್ಟಿನಲ್ಲಿ ಅನುಸರಿಸಲಾಗುತ್ತಿರುವ ಕ್ರಮಗಳು:

- ಜನ ಸಾಮಾನ್ಯರಲ್ಲಿ ಮಾದಕ ವಸ್ತುಗಳ ವಿರುದ್ಧ ಅರಿವು ಮೂಡಿಸುವ ಸಲುವಾಗಿ ಭಿತ್ತಿ ಪತ್ರಗಳನ್ನು, ಸಿನಿಮಾ ಮಂದಿರಗಳಲ್ಲಿ ಸ್ಲೈಡ್ ಶೋ, ಸುದ್ದಿ ಮಾಧ್ಯಮಗಳಲ್ಲಿ ಮಾದಕ ವಸ್ತುಗಳ ಬಳಕೆ ವಿರುದ್ಧ ಸಂದೇಶಗಳನ್ನು ಪ್ರಕಟಿಸುವುದು, ಹೀಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸಲಾಗುತ್ತಿದೆ.
- ವಿಶ್ವ ಸಂಸ್ಥೆಯ ನಿರ್ದೇಶನದನ್ವಯ ಪ್ರತಿ ವರ್ಷ ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಯಲ್ಲಿ ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆಯನ್ನು ತಡೆಗಟ್ಟಲು ರಾಜ್ಯಾದ್ಯಂತ ವಿಶೇಷ ಕಾರ್ಯಚರಣೆ ಕೈಗೊಳ್ಳಲಾಗುತ್ತಿದೆ. ಈ ಅವಧಿಯಲ್ಲಿ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ಮಾದಕ ವಸ್ತುಗಳ ಸೇವನೆಯಿಂದಾಗುವ ದೈಹಿಕ/ ಆರ್ಥಿಕ/ ಸಾಮಾಜಿಕ ದುಷ್ಪರಿಣಾಮಗಳ ಕುರಿತು ವಿಶೇಷ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.
- ಶಾಲಾ ಕಾಲೇಜುಗಳ ಬಳಿ ಗಸ್ತು ವಾಹನಗಳಿಂದ ವಿಶೇಷವಾಗಿ ಗಸ್ತು ನಡೆಸಿ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಇದಕ್ಕೆ ಬಲಿಯಾಗದಂತೆ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳು ಆಯಾ ಶಾಖೆಗಳಿಗೆ ಹೋಗಿ ಮಾದಕ ವಸ್ತುಗಳ ದುಷ್ಪರಿಣಾಮದ ಬಗ್ಗೆ ಅರಿವು ಮೂಡಿಸಲಾಗುತ್ತಿದೆ ಹಾಗೂ ಮಾದಕ ವಸ್ತು ಸಾಗಣೆ ಹಾಗೂ ಮಾರಾಟ ಮಾಡುವವರ ವಿರುದ್ಧ ನಿಗಾ ವಹಿಸಲಾಗುತ್ತಿದೆ.
- ಘನ ಸರ್ವೋಚ್ಚ ನ್ಯಾಯಾಲಯದ ಅಪರಾಧಿಕ ಮೇಲ್ಮನವಿ ಸಂಖ್ಯೆ: 652/2012ರಲ್ಲಿ ದಿನಾಂಕ 28/01/2016ರ ಆದೇಶದನ್ವಯ ಡಿ.ಜಿ. & ಐ.ಜಿ.ಪಿ ಕಛೇರಿ ಜ್ಞಾಪನ ಸಂಖ್ಯೆ: ಅಪರಾಧ-6/29/ಎಸ್.ಎಂ.ಎಸ್/2016, ದಿನಾಂಕ: 25/04/2016 ರಲ್ಲಿ ಮಾದಕ ವಸ್ತುಗಳ ಜಪ್ತಿ, ಸಂಗ್ರಹಣೆ ಮತ್ತು ವಿಲೇವಾರಿ  ಕುರಿತು ಕೈಗೊಳ್ಳಬೇಕಾದ ಕ್ರಮಗಳ ವಿವರಗಳನ್ನು ಎಲ್ಲಾ ಘಟಕಾಧಿಕಾರಿಗಳಿಗೆ ನೀಡಲಾಗಿದೆ.
- ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್.ಡಿ. 01 ಪಿಎನ್‌ಡಿ 2019, ದಿನಾಂಕ: 30/01/2020 ರಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಮತ್ತು ವಲಯ ಪೊಲೀಸ್ ಮಹಾ ನಿರೀಕ್ಷಕರುಗಳಿಗೆ ಪಿ.ಐ.ಟಿ. ಎನ್.ಡಿ.ಪಿ.ಎಸ್. ಕಾಯ್ದೆ, 1988ರ ಕಲಂ 3(1) ರಡಿಯಲ್ಲಿ ಮುಂಜಾಗ್ರತ ಕ್ರಮವಾಗಿ ರೂಢಿಗತ ಅಪರಾಧಿಗಳನ್ನು  ಬಂಧಿಸಲು  ಅಧಿಕಾರ ನೀಡಲಾಗಿದೆ.
- 2015ನೇ ಸಾಲಿನಲ್ಲಿ ಒಬ್ಬ ಅಪರಾಧಿ, 2018 ರಲ್ಲಿ ಮೂವರು ಅಪರಾಧಿಗಳ ಮೇಲೆ ಮಾದಕ ವಸ್ತುಗಳ ಬಳಕೆ ಹಾಗೂ ಸಾಗಾಣಿಕೆ ಪ್ರಕರಣಗಳಲ್ಲಿ ಎನ್.ಡಿ.ಪಿ.ಎಸ್. ಕಾಯ್ದೆಯ ಜೊತೆಗೆ ಗೂಂಡಾ ಕಾಯ್ದೆಯನ್ನು ಚಲಾಯಿಸಿ ಕ್ರಮ ಕೈಗೊಳ್ಳಲಾಗಿದೆ.

- ಸರ್ಕಾರದ ಆದೇಶ ಸಂಖ್ಯೆ: ಒಇ 16 ಪಿಎನ್‌ಡಿ 2018, ದಿನಾಂಕ: 27.08.2018 ರನ್ವಯ ಶಾಲಾ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹಂತದಲ್ಲಿ ಮಾದಕ ವಸ್ತುಗಳ ಬಳಕೆ ಮತ್ತು ಸಾಗಣೆ ತಡೆಗಟ್ಟಲು ವಿವಿಧ ಇಲಾಖೆಗಳ ಅಧಿಕಾರಿಗಳನ್ನೊಳಗೊಂಡಂತೆ ಸಮಿತಿಯನ್ನು ರಚಿಸಿ ಕರ್ತವ್ಯ ನಿಗದಿಪಡಿಸಲಾಗಿದೆ.
- 2020ನೇ ಸಾಲಿನಲ್ಲಿ ಮಾದಕ ವಸ್ತುಗಳ ಮಾರಾಟ ಮತ್ತು ಸಾಗಣೆ ಮಾಡುವವರ ವಿರುದ್ಧದ ಪ್ರಕರಣಗಳ ಪೈಕಿ ಒಂದು ಪ್ರಕರಣದಲ್ಲಿ ಆರೋಪಿಗಳ The Prevention of Illicit Traffic in Narcotic Drugs and Psychotropic Substances Act, 1988 ಕಾಯ್ದೆಯನ್ನು ಸಹ ಅಳವಡಿಸಲಾಗಿದೆ. ಮಾದಕ ವಸ್ತುಗಳ ಉತ್ಪಾದನೆ, ಸಾಗಾಣಿಕೆ, ಮಾರಾಟ ಮತ್ತು ಸೇವನೆಯನ್ನು ತಡೆಗಟ್ಟುವ ಹಾಗೂ ಎನ್.ಡಿ.ಪಿ.ಎಸ್ ಕಾಯ್ದೆಯನ್ನು ಕಡ್ಡಾಯ ಅನುಷ್ಠಾನಗೊಳಿಸುವ ಸಂಬಂಧವಾಗಿ ಅಗತ್ಯ ಕ್ರಮ ಕೈಗೊಳ್ಳಲು ಎಲ್ಲಾ ಘಟಕಾಧಿಕಾರಿಗಳಿಗೆ ಈ ಕಛೇರಿಯ ಸುತ್ತೋಲೆ ಸಂಖ್ಯೆ: ಅಪರಾಧ-6/25/2020, ದಿನಾಂಕ: 03/09/2020ರಲ್ಲಿ ಸೂಚನೆಗಳನ್ನು ನೀಡಲಾಗಿದೆ.